ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

ಅನಧಿಕೃತವಾಗಿ ಗಣಿಗಾರಿಕೆ ತಡೆಗಟ್ಟುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

101 (161) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು, ಹೊಣಕೆರೆ ಹೋಬಳಿ ಗಂಗಸಮುದ್ರ ಗ್ರಾಮದ ಎಲ್ಲೆ ವ್ಯಾಪ್ತಿಯ ಸರ್ವೆ ನಂ.143ರಲ್ಲಿ 2013-14ನೇ ಸಾಲಿನಲ್ಲಿ 65 ಎಕರೆ ಭೂಮಿಯನ್ನು ಸುರಕ್ಷಿತ ಗಣಿ ಕೈಗಾರಿಕಾ ವಲಯದಲ್ಲೆ ಮೀಸಲಿಟ್ಟ ಪ್ರದೇಶ 4(1) ಆಗಿರುವಂತಹ ಪ್ರದೇಶದಲ್ಲಿ ಅನಧಿಕೃತವಾಗಿ ಗಣಿಗಾರಿಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕ್ರಷರ್ ಮಾಲೀಕರು ಮತ್ತು ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಂಡಿದೆ ; (ವಿವರವಾದ ಮಾಹಿತಿಯನ್ನು ನೀಡುವುದು)

(ಆ) ಗೊಲ್ಲರಹಳ್ಳಿ, ಬಂಕಾಪುರ, ಪಡುವಲ ಪಟ್ಟಣ ಗ್ರಾಮಗಳ ಜನರಿಗೆ ಈ ಅಕ್ರಮ ಗಣಿಗಾರಿಕೆಯಿಂದ ಮನೆಗಳು ಶಿಥಿಲಗೊಂಡಿರುವುದು ಹಾಗೂ ಮುಖ್ಯ ರಸ್ತೆಗಳು ಹದಗೆಟ್ಟಿದ್ದು ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸಾರ್ವಜನಿಕರು ದೂರು ನೀಡಿದ್ದರೂ ಯಾವುದೇ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಕೈಗೊಂಡಿರುವ ಕ್ರಮಗಳ ಬಗ್ಗೆ ಮಾಹಿತಿ ನೀಡುವುದು ? (ಗಂಗಸಮುದ್ರ ಎಲ್ಲೆ ಸರ್ವೆ ನಂ.143ರ 65 ಎಕರೆ ಭೂ ಸುರಕ್ಷಿತ ವಲಯಕ್ಕೆ ಮೀಸಲಿಟ್ಟಿರುವ 4(1) ಪ್ರತಿಯನ್ನು ಒದಗಿಸುವುದು)